# ತರಗತಿಗಳಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪುನರ್ಬಲಪಡಿಸುವುದು

## ಅಲಿಸ್ ಆಸ್ಟಿನ್ ಬರ್ವಾ

ಶಾಲೆಯುವಿದ್ವತ್ಪೂರ್ಣಕಲಿಕೆಯಜೊತೆಗೆ,ಮಕ್ಕಳುಇತರರೊಂದಿಗೆಬೆರೆಯಲುಕಲಿಯುವಜಾಗಕೂಡಆಗಿದೆ.ಅಂಥ ಸಾಮಾಜೀಕರಣವು ಸಾಮಾಜಿಕ ಅಸಮಾನತೆಯನ್ನು ಪುನರ್ಬಲಪಡಿಸಿದರೂ, ಅವುಗಳನ್ನು ಚರ್ಚಿಸಿ, ಅವುಗಳ ಬಗ್ಗೆ ಜಾಗೃತಿ ಮೂಡಿಸಿ, ನಿಜ ಜಗತ್ತಿನಲ್ಲಿ ಅವುಗಳನ್ನು ಪ್ರಶ್ನಿಸಲು ಕಲಿಯುವಂತೆ ಮಾಡುವುದೂ ಇದೇ ಜಾಗದಲ್ಲೇ ಸಾಧ್ಯವಾಗುತ್ತದೆ. ಸಮಾಜದೊಳಗೆ ಮಗುವೊಂದರ ಜಾಗವೆಲ್ಲಿದೆ ಎಂದು ಕಂಡುಕೊಳ್ಳುವಲ್ಲಿ ಕೂಡ ಶಾಲೆ ಅವಶ್ಯಕ ಪಾತ್ರ ವಹಿಸುತ್ತದೆ, ಮಾತುಗಳನ್ನು ಮೀರಿದ ನಮ್ಮ ಕ್ರಿಯೆಗಳು ಮತ್ತು ಅಂಗೀಕೃತ ಪದ್ಧತಿಗಳ ಮೂಲಕ ಮಕ್ಕಳಿಗೆ ತಮ್ಮ ಚೈತನ್ಯವನ್ನು ವೈಯಕ್ತಿಕ ಹಾಗು ಸಾಮಾಜಿಕ ಪರಿವರ್ತನೆಗೆ ಬಳಸಿಕೊಳ್ಳಲು ನಿರ್ದೇಶಿಸಲು ಸಹಾಯ ಮಾಡುವ ಮೂಲಕ ಪ್ರಜಾಪ್ರಭುತ್ವದ ಭವಿಷ್ಯವೊಂದಕ್ಕೆ ತಳಹದಿ ರೂಪಿಸುವುದು ಅನಿವಾರ್ಯವಾಗುತ್ತದೆ.

**ತರಗತಿಯ ಚಾಲಕಶಕ್ತಿಗಳು**

ನನ್ನ ಸಹೋದ್ಯೋಗಿ-ಪದವಿ ಕಾರ್ಯಕ್ರಮದ ಅಂಗವಾಗಿ ಛತ್ತೀಸ್‌ಗಢದ ಖರ್ಸಿಯಾ ಗ್ರಾಮದ ಸರ್ಕಾರಿ ಶಾಲೆಯಲ್ಲಿ ಕಲಿಸಲು ಶುರು ಮಾಡಿದಾಗ *ಆಪ್ ಹಮೆ ಮಾರ್ತೆ ಕ್ಯೂ ನಹಿ ಹೋ?* (ನೀವೇಕೆ ನಮ್ಮನ್ನು ಹೊಡೆಯುವುದಿಲ್ಲ?) ಎಂಬುದು ನನಗೆಪದೇಪದೇಎದುರಾಗುತ್ತಿದ್ದ ವಿಚಿತ್ರವಾದರೂ ನಿರ್ದಿಷ್ಟವಾದ ಪ್ರಶ್ನೆ. ಶಾಲೆಯ ಭೇಟಿಯ ನನ್ನ ಮೊದಲಿನ ದಿನಗಳಲ್ಲಿ ನನಗೆ ಮೌನ ಮತ್ತು ಕುತೂಹಲಗಳಷ್ಟೇ ಎದುರಾಗುತ್ತಿದ್ದವು. ಬಹಳ ಸಲ, ಅಧಿಕಾರಯುತ ವ್ಯಕ್ತಿಯಾದ ಶಿಕ್ಷಕರ ಸಾನ್ನಿಧ್ಯದಲ್ಲಿ ಅವರಕುತೂಹಲಕ್ಕಿಂತಅವರ ಮೌನವೇ ಗೆಲ್ಲುತ್ತಿತ್ತು. ಆದರೆ ಶಿಕ್ಷಕರ ಗೈರುಹಾಜರಿಯಲ್ಲಿ, ಮಕ್ಕಳು ತಮ್ಮತಮ್ಮಲ್ಲೇ ಹೊಡೆದಾಡಿಕೊಳ್ಳುತ್ತ ಕೋಲಾಹಲವೇ ಏಳುತ್ತಿತ್ತು.

ಶಿಸ್ತು ಎಂದರೆ ಭಣಗುಡುವ ಮೌನವೆಂದು ಅರ್ಥೈಸಲಾಗಿದ್ದು, ಅದನ್ನು ಸಾಧಿಸಲು ಶಿಕ್ಷಕರು 20-25 ಮಕ್ಕಳ ಗುಂಪಿನಲ್ಲಿ ದೊಡ್ಡ ಧ್ವನಿಯೆತ್ತಿ ಕೂಗಬೇಕಾಗಿತ್ತು. ಅಲ್ಪಾವಧಿಯಲ್ಲಿ ಈ ವಿಧಾನ ಕೆಲಸ ಮಾಡಿದಂತೆನಿಸಿದರೂ, ಮಕ್ಕಳು ತಮ್ಮ "ಆದೇಶ"ವನ್ನು ಪಾಲಿಸದ ಸಹಪಾಠಿಗಳಿಗೆ ಅದೇ ವಿಧಾನವನ್ನು ಬಳಸಿ ಹೊಡೆಯುವುದು ಕೂಗುವುದು ಮಾಡಿ ಒಂದು ಪರಿಹಾರ ಕಂಡುಕೊಳ್ಳುವುದೇ ಇದರ ಪರಿಣಾಮವಾಗಿತ್ತು. ವಯಸ್ಕರು ತಮ್ಮ ಸುತ್ತ ಏನನ್ನು ಮಾಡುತ್ತಿದ್ದರೋ ಅದನ್ನೇ ಮಕ್ಕಳು ಕೂಡ ಅಂತರ್ಗತಗೊಳಿಸಿಕೊಂಡಿದ್ದರು. ನನ್ನ ತರಗತಿಯನ್ನು ನಡೆಸಲು, ಈ ವಿದ್ಯಾರ್ಥಿಗಳ ವರ್ತನೆಯನ್ನು ನಿಭಾಯಿಸಲು ಒಂದು ಉತ್ತಮ ಪರ್ಯಾಯವಷ್ಟೇ ಅಲ್ಲ, ಅವರ ವರ್ತನೆಯ ಹಳೆಯ ಮಾದರಿಯನ್ನು ಮರೆಯಲು ಬೇಕಾದ ಅವಕಾಶದ ಅಗತ್ಯ ಕೂಡ ಇತ್ತು.

*ಡಿಸ್‌ಕಶನ್ಸ್ ತೊ, ಮಿಸ್, ಬಡೆ ಲೋಗೋಂ ಸೆ ಹೋತೆ ಹೆ, ಹಮಾರೆ ಸಾಥ್ ಥೋಡಿ*! (ಚರ್ಚೆಗಳೆಲ್ಲಾ ಮಿಸ್, ದೊಡ್ಡವರೊಂದಿಗೆ ಆಗುತ್ತದೆ, ನಮ್ಮ ಜೊತೆಯೆಲ್ಲಾ ಯಾರು ಮಾಡುತ್ತಾರೆ!) ಕಲಿಕೆಯನ್ನು ದೃಢಪಡಿಸಲು ಅವರ ಪ್ರಕಾರ ಯಾವ ಅಭ್ಯಾಸಗಳನ್ನು ರೂಢಿಸಿಕೊಳ್ಳಬೇಕು ಎಂಬುದನ್ನು ಚರ್ಚಿಸಲು ನಾನು ನನ್ನ ತರಗತಿಯ ಮಕ್ಕಳೊಂದಿಗೆ ಕೂತಾಗ ಒಬ್ಬ ಹುಡುಗಿ ಹೇಳಿದ ಮಾತಿದು. ಈ ಮಾತಿನಿಂದ ಅಧಿಕಾರ ಬಳಕೆಯಾಗುವ ರೀತಿಯನ್ನು ನೋಡುವುದರ ಮೂಲಕ ಹೇಗೆ ಮಕ್ಕಳಲ್ಲಿಅದರಬಗೆಗಿನದೃಷ್ಟಿಕೋನ ಮೂಡುತ್ತದೆ ಎಂಬುದರ ಅರಿವು ನನಗಾಯಿತು. ಬಹಳ ಸಲ, ಅವರೊಡನೆ ಸೂಕ್ತವಾದ ಸಂವಾದವನ್ನು ಸಹ ಮಾಡದೇ ಕೆಲವೊಂದು ಪರಿಸರಗಳಲ್ಲಿ ಕೆಲವೊಂದು ರೀತಿ ವರ್ತಿಸಲು ಅವರಿಂದ ನಿರೀಕ್ಷಿಸಲಾಗುತ್ತದೆ.

ಮಕ್ಕಳು ಖಾಲಿ ಹಾಳೆಯಂತೆ ಎಂದು ಸಾಮಾನ್ಯವಾಗಿ ನೋಡುವ ಸಂದರ್ಭದಲ್ಲಿ, ಅಧಿಕಾರದಲ್ಲಿರುವ ವಯಸ್ಕರು ಈ ರೀತಿಯ ಸಂವಾದಗಳು ಮಕ್ಕಳ ವಯಸ್ಸಿಗೆ ಮೀರಿದ್ದು ಎಂದು ನಂಬಿರುತ್ತಾರೆ. ನನಗೆ ಅರ್ಥವಾದ ಪ್ರಕಾರ, ದೊಡ್ಡದಾದ

ಸಮಾಜದಲ್ಲಿ ಇದೂ ಅಧಿಕಾರದ, ಸವಲತ್ತಿನ ಮತ್ತು ಹೊರಗಿಡುವ ಒಂದು ರೂಪವೇ ಆಗಿದೆ. ತರಗತಿಗಳಲ್ಲಿ, ಅಧಿಕಾರವುಳ್ಳ, ಪ್ರಾಬಲ್ಯದ ಜೊತೆ ಗುರುತಿಸಿಕೊಳ್ಳುವ ಜನ, ಪ್ರಜಾಪ್ರಭುತ್ವರಹಿತ ನಿರ್ಧಾರಗಳನ್ನು ನಿರ್ಬಂಧವಿಲ್ಲದೇ ತೆಗೆದುಕೊಳ್ಳುತ್ತಾರೆ. ಕೆಲವು ಕ್ಷೇತ್ರಗಳಲ್ಲಿ ಪ್ರಾಬಲ್ಯದ ಈ ಸ್ಥಾನವನ್ನು ಪರಿಣತಿಗೆಸಮನಾಗಿ ನೋಡಲಾಗುತ್ತದೆ; ಒಪ್ಪಿಕೊಳ್ಳಲಾಗುತ್ತದೆ. ಈ ಸಾಂಪ್ರದಾಯಿಕ ತರಗತಿಗಳು ಯಥಾ ಸ್ಥಿತಿಯನ್ನು ಒಪ್ಪಿಕೊಳ್ಳುವುದನ್ನು ಪುನರ್ಬಲಗೊಳಿಸುವುದಲ್ಲದೇ ವಿಮರ್ಶಾತ್ಮಕ ಚಿಂತನೆ ಮತ್ತು ಸ್ವ-ಪರ್ಯಾಲೋಚನೆಯನ್ನು ಕುಂಠಿತಗೊಳಿಸುತ್ತವೆ.

**ಪ್ರಜಾಪ್ರಭುತ್ವದ ಪ್ರಕ್ರಿಯೆಗಳನ್ನು ಪುನರ್ಬಲಪಡಿಸುವುದು**

ತರಗತಿಗಳ ರೂಢಿಗತ ನಿಯಮಗಳ ಬಗ್ಗೆ ಮಾತಾಡಲು ಕೊಟ್ಟ ಅವಕಾಶದಿಂದ ವಿದ್ಯಾರ್ಥಿಗಳು ತಾವು ತರಗತಿಯ ಯಾವ ಅಭ್ಯಾಸಗಳನ್ನು ಪಾಲಿಸಬೇಕು ಎಂಬುದರ ಬಗ್ಗೆಯಷ್ಟೇ ಅಲ್ಲ, ಏಕೆ ಪಾಲಿಸಬೇಕು ಎಂಬುದರ ಬಗ್ಗೆ ಕೂಡ ಚರ್ಚೆ ಮಾಡಲು ಸಾಧ್ಯವಾಯಿತು. ಇದರಿಂದಾಗಿ ವಿದ್ಯಾರ್ಥಿಗಳು:

ಸಂವಾದ ಮತ್ತು ಪ್ರಜಾಪ್ರಭುತ್ವಕ್ಕೆ ಅನುಗುಣವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಪ್ರಕ್ರಿಯೆಯ ಪ್ರಾಮುಖ್ಯತೆಯನ್ನು. ತರಗತಿಯಲ್ಲಿ ಅಂಗೀಕೃತವಾದ ಅಭ್ಯಾಸಗಳನ್ನು, ಚರ್ಚೆಗಳಲ್ಲಿ ಮಾತನಾಡುವ ಮತ್ತು ಕೇಳಿಸಿಕೊಳ್ಳುವುದರ ಪ್ರಾಮುಖ್ಯತೆಯನ್ನು, ಮತ್ತು ಕೇಳಿಸಿಕೊಳ್ಳುವುದಕ್ಕೋಸ್ಕರ ನಾವೂ ಕೂಡ ಲಕ್ಷ್ಯವಿಡಬೇಕು ಮತ್ತು ಅವಾಗಾವಾಗ ಮೌನವಾಗಿರಬೇಕು ಎನ್ನುವುದರ ಪ್ರಾಮುಖ್ಯತೆಯನ್ನು  ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು.

ತರಗತಿಯ ಅಭ್ಯಾಸಗಳನ್ನು ವಿಮರ್ಶಿಸಿ ಪ್ರಶ್ನಿಸಲು ಅನುವು ಮಾಡಿಕೊಟ್ಟಿತು. ಉದಾಹರಣೆಗೆ, ದೈಹಿಕ ಶಿಕ್ಷೆಯ ಬಳಕೆಯು, ಮಕ್ಕಳು ಹೊಡೆತ ತಿಂದಾಗ ನಿಜವಾಗಿಯೂ ಕಲಿಕೆ ಸಾಧ್ಯವಾಗುತ್ತದೆಯೇ ಎಂಬ ನಂಬಿಕೆಯ ಬಗ್ಗೆ ಚರ್ಚೆಗೆ ಎಡೆ ಮಾಡಿಕೊಟ್ಟಿತು.

ತರಗತಿಯ ಮಾತುಕತೆಯಲ್ಲಿ ನಮಗೆ ಎದುರಾದ ಸವಾಲುಗಳನ್ನು ಆಧರಿಸಿ - ತಮ್ಮ ತರಗತಿಗೇ ವಿಶಿಷ್ಟವಾದ ನಿಯಮಗಳನ್ನು  ಸಹ-ಸೃಷ್ಟಿ ಮಾಡಲು ಸಾಧ್ಯವಾಯಿತು.

ಈ ಚರ್ಚೆಯು ಪೂರ್ವಭಾವೀ ವರ್ತನೆಯ ನಿರ್ವಹಣಾ ಅಭ್ಯಾಸಗಳ ಒಂದು ಭಾಗವಾಗಿದ್ದು, ಅಲ್ಲಿ ವರ್ತನೆಯ ನಿರೀಕ್ಷೆಗಳನ್ನು ಸ್ಪಷ್ಟವಾಗಿ ತಿಳಿಸಲಾಯಿತು. ಒಬ್ಬ ಶಿಕ್ಷಕಳಾಗಿ, ಇದು ನನಗೆ ನೆನಪಿನಲ್ಲಿಟ್ಟುಕೊಳ್ಳಬೇಕಾದ ಅಂಶಗಳನ್ನು ಸ್ಥಾಪಿಸಲು ಹಾಗೂ ಅನಪೇಕ್ಷಿತ ನಡವಳಿಕೆಗಳನ್ನು ಪೂರ್ವದಲ್ಲೇ ತಿದ್ದಲು ಅವಕಾಶ ಮಾಡಿಕೊಟ್ಟಿತು.

**ಶಿಕ್ಷಕರ ಪಾತ್ರ**

ಪ್ರತೀ ತರಗತಿಯೂ ತನ್ನ ವಿಶಿಷ್ಟವಾದ ವಿದ್ಯಾರ್ಥಿಗಳ ಸಮೂಹದಿಂದಾಗಿ, ವಿಭಿನ್ನವಾಗಿರುತ್ತದೆ, ನನ್ನ ವಿದ್ಯಾರ್ಥಿಗಳಅಗತ್ಯಗಳನ್ನು ಅರ್ಥಮಾಡಿಕೊಳ್ಳುವುದು ಸುದೀರ್ಘವಾದ ನಿರಂತರ ಪ್ರಕ್ರಿಯೆಯ ಭಾಗವಾದರೂ, ನಮ್ಮ ತರಗತಿಯ ಎಂದಿನ ವ್ಯವಹಾರಗಳ ಸಮಯದಲ್ಲಿ ಮಕ್ಕಳ ವರ್ತನೆಯನ್ನು ಪೂರ್ವಭಾವಿಯಾಗಿ ನಿರ್ವಹಿಸಲು ಕೆಲವು ಸಾಧಕಗಳನ್ನು ಸ್ಥಾಪಿಸಿಕೊಂಡೆವು.

ಅತೀ ಚೈತನ್ಯಶೀಲ ವಿದ್ಯಾರ್ಥಿಗಳ ಮೇಲೆ ಕೂಗಾಡುವ ಬದಲು ನಾವು ತರಗತಿಯಲ್ಲಿ ವಿದ್ಯಾರ್ಥಿಗಳ ಗಮನವನ್ನು ನಿಯತವಾಗಿ ಸೆಳೆಯಲು 'ಮಾರ್ಕೊ-ಪೋಲೋ' ಅಥವಾ '1,2,3,ನನ್ನನ್ನು ನೋಡು' ಇಂತಹ ಕರೆಯುವ-ಉತ್ತರಿಸುವ ಕಾರ್ಯತಂತ್ರಗಳನ್ನು ರೂಪಿಸಿಕೊಂಡೆವು. ಇದು ವಿಶೇಷವಾಗಿ ಪ್ರಾಥಮಿಕ ತರಗತಿಯ ಮಕ್ಕಳ ವಿಷಯದಲ್ಲಿ ಸಹಾಯಕ್ಕೆ ಬಂತು. ಏಕೆಂದರೆ ತಮಗಿಂತ ಹಿರಿಯ ತರಗತಿಗಳ ಮಕ್ಕಳಿಗಿಂತ ಇವರ ಲಕ್ಷ್ಯದ-ಅವಧಿ ಬಹಳ ಕಡಿಮೆಯಿತ್ತು.

ನನ್ನಗೈರುಹಾಜರಿಯಲ್ಲಿಕೂಡವಿದ್ಯಾರ್ಥಿಗಳು ತರಗತಿಯ ವ್ಯವಹಾರಗಳಿಗೆ ತಮ್ಮ ಸಹಪಾಠಿಗಳನ್ನು ಸುಮ್ಮನಾಗಿಸಲು ಇದನ್ನು ಬಳಸಿದರು.

ಸ್ವ-ನಿರ್ವಹಣೆ ಮತ್ತು ಸ್ವ-ಅರಿವನ್ನು ಇನ್ನೂ ಹೆಚ್ಚಿಸಲು, ನಾವು ತರಗತಿಯಲ್ಲಿ ಧ್ಯಾನ ಮಾಡುವುದನ್ನು ರೂಢಿ ಮಾಡಿದೆವು. ಮೊದಮೊದಲಿಗೆ ಇದು ಬರೀ ಶನಿವಾರವಷ್ಟೇ ನಡೆಯುತ್ತಿತ್ತು, ಆಗ ನಾಲ್ಕು ನಿಮಿಷವಾದರೂ ಕಿಸಿಕಿಸಿ ನಗದೇ ಶಾಂತವಾಗಿ ಕೂರುವುದೇ ದೊಡ್ಡ ಕೆಲಸವಾಗಿತ್ತು. ಆದರೆ ನಿಧಾನವಾಗಿ, ವಿದ್ಯಾರ್ಥಿಗಳು ಇದಕ್ಕೆ ಹೊಂದಿಕೊಳ್ಳತೊಡಗಿದರು, ಕೆಲವೊಮ್ಮೆ ಗೋಡೆಗೆ ಆತುಕೊಂಡು ಕೂತು, ಹಿನ್ನೆಲೆಯಲ್ಲಿ ಕೇಳಿಬರುತ್ತಿದ್ದ ಮೆಲುವಾದ ವಾದ್ಯಗಳ ಸಂಗೀತವನ್ನು ಕೇಳುತ್ತಾ ಧ್ಯಾನ ಮಾಡಲು ತೊಡಗಿದರು. ಇದು ವಿದ್ಯಾರ್ಥಿಗಳಲ್ಲಿ ಭಾವನಾತ್ಮಕಸಮಚಿತ್ತತೆ ಮತ್ತು ಅರಿವನ್ನು ಮೂಡಿಸಲು ಸಹಾಯಕವಾಯಿತು.

*ಮ್ಯಾಮ್ ಕಾ ತಬೀಯತ್ ಖರಾಬ್ ಹೆ, ಆಜ್ ಪರೇಶಾನ್ ನಹಿ ಕರ್ನಾ.* (ಮೇಡಂ ಅವರಿಗೆ ಹುಶಾರಿಲ್ಲ, ಅವರಿಗೆ ತೊಂದರೆ ಕೊಡಬೇಡಿ). ನನಗೆ ಹುಶಾರಿಲ್ಲದೆ ಇದ್ದ ಒಂದು ದಿನ, ನನ್ನ ವಿದ್ಯಾರ್ಥಿಗಳಲ್ಲಿ ಒಬ್ಬ ಎಲ್ಲರೂತಮ್ಮತರಗತಿಯಲ್ಲಿಶಾಂತವಾಗಿ, ಲಕ್ಷ್ಯವಿಟ್ಟುಕೂರಲುಎಲ್ಲರ ಕಿವಿಯಲ್ಲೂ ಹೀಗೆ ಹೇಳಿದ್ದ. ಕರುಣೆಯ, ಸಹಾನುಭೂತಿಯ ಇಂಥ ವರ್ತನೆಗಳು ತರಗತಿಯಲ್ಲಿ ನಾವು ಕಾದುಕೊಂಡಿರುವ ಪ್ರಜಾಪ್ರಭುತ್ವದ ಮಾತುಕತೆಗಳು ಮತ್ತು ಅಂಗೀಕೃತ ಪದ್ಧತಿಗಳನ್ನು ಪ್ರತಿಬಿಂಬಿಸುತ್ತವೆ. ಇದು ಅವರ ಸುತ್ತಮುತ್ತಲಿನ ಅರಿವನ್ನಷ್ಟೇ ಅಲ್ಲ, ತಮ್ಮ ಬಗ್ಗೆಯೇ ಇರುವ ಸ್ವಂತ ಅರಿವು, ಸ್ವ-ನಿರ್ವಹಣೆ ಮತ್ತು ಜವಾಬ್ದಾರಿಯುತ ನಿರ್ಣಯ ತೆಗೆದುಕೊಳ್ಳುವ ಕೌಶಲ್ಯಗಳನ್ನೂ ತೋರಿಸುತ್ತದೆ.

**ಗೆಳೆಯರ ವ್ಯವಸ್ಥೆ**

ಒಬ್ಬ ಶಿಕ್ಷಕಳಾಗಿ, ತರಗತಿಯಲ್ಲಿ ಒಪ್ಪಿತ ನಡವಳಿಕೆಗಳನ್ನು ಬಲಪಡಿಸುವುದಕ್ಕೆ ಮತ್ತು ವಿದ್ಯಾರ್ಥಿಗಳನಡುವೆ ಸಮಾನ ಪಾಲುದಾರಿಕೆಯನ್ನು ಸ್ಥಾಪಿಸುವುದಕ್ಕೆ ಈ ಎರಡೂ ಕಾರಣಗಳಿಗೋಸ್ಕರ ವಿದ್ಯಾರ್ಥಿ-ಕೇಂದ್ರಿತ ಹಾಗು ಪ್ರಜಾಪ್ರಭುತ್ವದ ತರಗತಿಯ ಅನುಭವಗಳನ್ನು ಮೂಡಿಸುವುದಕ್ಕೆ, ವಿದ್ಯಾರ್ಥಿಗಳು ಎಲ್ಲಿ ಕಷ್ಟಪಡುತ್ತಿದ್ದಾರೆ ಎಂಬುದನ್ನು ನಾನು ಗುರುತಿಸಬೇಕಿತ್ತು. ನನ್ನ ವಿದ್ಯಾರ್ಥಿಗಳನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯು ಅವರ ಮನೆ ಮತ್ತು ಸಮುದಾಯಕ್ಕೆ ಭೇಟಿ ನೀಡುವುದನ್ನು ಒಳಗೊಂಡಿತ್ತು, ಇದು ನನಗೆ ತರಗತಿಯಲ್ಲಿ ಸಿಗುತ್ತಿದ್ದ ವಿವಿಧ ಸಾಂಸ್ಕೃತಿಕ ಹಾಗು ವರ್ತನೆಗೆ ಸಂಬಂಧಿಸಿದ್ದ ಪ್ರತಿಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡಿತು.

ಈ ಪ್ರಸ್ತಾಪಿಸುವ ಪ್ರಸಂಗ ಅನು ಎಂಬ ಹುಡುಗನದ್ದು. ಇವನು ಶಾಲೆಯ ಪಕ್ಕದಲ್ಲೇ ವಾಸವಾಗಿದ್ದರೂ ಶಾಲೆಗೆ ಪದೇ ಪದೇ ಗೈರುಹಾಜರಾಗುತ್ತಿದ್ದನು. ಅವನು ದೊಡ್ಡ ದನಿಯಲ್ಲಿ ಮಾತನಾಡುತ್ತ, ಎಲ್ಲದಕ್ಕೂ ಸ್ಪಂದಿಸುತ್ತಿದ್ದನಾದರೂ ತರಗತಿಯಲ್ಲಿ ಬರೆಯಲೂ ಲಕ್ಷ್ಯ ಕೊಡಲೂ ಕಷ್ಟಪಡುತ್ತಿದ್ದನು. ಅವನ ದೊಡ್ಡ ದನಿಯ ಪ್ರತಿಕ್ರಿಯೆಗಳ ಹೊರತಾಗಿಯೂ ಅವನನ್ನು ತರಗತಿಯಲ್ಲಿ ಉದಾಸೀನ ಮಾಡಲಾಗುತ್ತಿತ್ತು ಮತ್ತು ಅವನ ಬಾಯಿಮುಚ್ಚಿಸಲಾಗುತ್ತಿತ್ತು. ಅವನು ತನಗಿಂತ ಒಂದು ವರ್ಷ ಕಿರಿಯವರಾದ ತನ್ನ ಸಹಪಾಠಿಗಳ ಜೊತೆ ಹೊಡೆದಾಟಕ್ಕೆ ತೊಡಗಿ ಅವರನ್ನು ಹೊಡೆದು ಬಡಿದು ಮಾಡಲು ಶುರು ಮಾಡಿದ. ತರಗತಿಯ ಚರ್ಚೆಯೊಂದರಲ್ಲಿ, ಅವನ ತಾಯಿ ಅವನನ್ನು ಬಿಟ್ಟು ಹೋಗಿದ್ದಳೆಂದೂ ಅವನ ತಂದೆ ರಾಜ್ಯದ ಹೊರಗೆಲ್ಲೋ ಕೆಲಸ ಮಾಡುತ್ತಿದ್ದನೆಂದೂ ತಿಳಿದು ಬಂದಿತು. ಅವನ ಸಹಪಾಠಿಗಳ ಜೊತೆ ಮೊದಲೇ ಮಾತಾಡಿಕೊಂಡು ನಾವು ಅವನ ಮನೆಗೆ ಒಂದು ದಿನ ಭೇಟಿ ಮಾಡಿದೆವು. ನಾವು ನಮ್ಮ ತರಗತಿಯ ಕೆಲ ಅನುಭವಗಳನ್ನು ಅವನೊಡನೆ ಹಂಚಿಕೊಂಡು ಶಾಲೆಗೆ ಬರಲು ಉತ್ತೇಜಿಸಿದೆವು. ಅವನಿಗೆ ಸಹಾಯ ಮಾಡುವೆವು ಎಂದು ಅವನಿಗೆ ಭರವಸೆ ನೀಡಿ "ಗೆಳೆಯರ ವ್ಯವಸ್ಥೆ"ಯನ್ನು ಅನುಷ್ಠಾನಕ್ಕೆ ತಂದೆವು.

"ಗೆಳೆಯರ ವ್ಯವಸ್ಥೆ"ಯಲ್ಲಿ, ವಿದ್ಯಾರ್ಥಿಗಳನ್ನು ತಮ್ಮ ಶೈಕ್ಷಣಿಕ ಹಾಗು ವರ್ತನೆಗೆ ಸಂಬಂಧಿಸಿದ ಅವಶ್ಯಕತೆಗಳಿಗೆ ಅನುಸಾರವಾಗಿ ಜೋಡಿ ಮಾಡಲಾಗುತ್ತದೆ. ಅನುಗೆ ಮಾನಸಿಕ ಗಣಿತವನ್ನು ಸುಲಭವಾಗಿ ಮಾಡಲು ಸಾಧ್ಯವಾಯಿತು

ಹಾಗು ಉತ್ತೇಜಿಸಿದಾಗ, ಹಿಂದಿ ( ನಮ್ಮ ಎರಡನೇ ಭಾಷೆ) ಮತ್ತು ಇಂಗ್ಲೀಷ್ ( ನಮ್ಮ ಮೂರನೇ ಭಾಷೆ) ಅನ್ನು ಓದಲು ಪ್ರಯತ್ನ ಕೂಡ ಮಾಡತೊಡಗಿದ. ಈ ಗೆಳೆಯರ ವ್ಯವಸ್ಥೆಯು ಅವನಿಗೆ ತರಗತಿಯಲ್ಲಿ ಸಕ್ರಿಯವಾಗಿ ಭಾಗವಹಿಸಲು, ಸ್ನೇಹ ಗಳಿಸಲು ಮತ್ತು ತನ್ನ ಸಹಚರನ ಕಲಿಕೆಯ ಪ್ರಕ್ರಿಯೆಯ ಜವಾಬ್ದಾರಿ ತೆಗೆದುಕೊಳ್ಳಲು ಪ್ರೇರೇಪಿಸಿತು. ಅವನ ತರಗತಿಯ ಕಲಿಕೆಯ ಮೇಲೆ ತೀವ್ರ ಪರಿಣಾಮವುಂಟಾಗಿ ಶಾಲಾ ವರ್ಷದ ಅಂತ್ಯದವರೆಗೆ ಸ್ವತಂತ್ರವಾಗಿ ಒಂದು ಪ್ಯಾರಾಗಿಂತ ಹೆಚ್ಚು ಬರೆಯಲು ಅವನು ಇನ್ನೂ ಕಷ್ಟಪಡುತ್ತಿದ್ದರೂ, ಹಿಂದಿ ಮತ್ತು ಇಂಗ್ಲೀಷ್ ಎರಡನ್ನೂ ನಿರರ್ಗಳವಾಗಿ ಓದಲು ಅವನಿಂದ ಸಾಧ್ಯವಾಯಿತು. ಹೊಡೆದಾಟದಲ್ಲೇ ತೊಡಗಿಕೊಂಡಿರುತ್ತಿದ್ದ ಮಗುವಿನಿಂದ ಅವನು ಕಿರಿಯ ವಿದ್ಯಾರ್ಥಿಗಳ ನಡುವೆ ಹೊಡೆದಾಟವನ್ನು ತಪ್ಪಿಸುವ ಮಟ್ಟಕ್ಕೆ ಬೆಳೆದನು.

**ಪರಿಸಮಾಪ್ತಿ**

ಶಿಸ್ತಿನ ಒಂದು ಸ್ವರೂಪವಾಗಿ ಸಂಪೂರ್ಣ ವಿಧೇಯತೆಯ ನಿರೀಕ್ಷೆಗಳು ಸರ್ವಾಧಿಕಾರದ ಹಾಗೂ ನಿರಂಕುಶಪ್ರಭುತ್ವದ ರೂಪಗಳು, ಇವು ತರಗತಿಗಳಲ್ಲಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಇಬ್ಬರನ್ನೂ ಯಾಂತ್ರೀಕರಿಸಿಬಿಡುತ್ತವೆ. ಹಿಂಸೆಗಿಳಿಯುವ, ಅಂದರೆ, ದಹಿಕ ಶಿಕ್ಷೆ ಮತ್ತು ಮೌಖಿಕ ಅವಹೇಳನವು ಮಕ್ಕಳಲ್ಲಿ ಮತ್ತು ದೊಡ್ಡವರಲ್ಲಿ ತರಗತಿಯ ಪೂರ್ವಭಾವೀ ನಿರ್ವಹಣೆಯ, ಸಹಯೋಗಿಕ ಕ್ರಿಯೆಗಳ ಮತ್ತು ಸಾಮಾಜಿಕ-ಭಾವನಾತ್ಮಕ ಕಲಿಕೆಯ ಕೊರತೆಯನ್ನು ತೋರಿಸುತ್ತದೆ.

ವಿದ್ಯಾರ್ಥಿಗಳನ್ನು ಮಾನವೀಕರಿಸಿ ನೋಡುವ ದೃಷ್ಟಿಯ ಅಗತ್ಯವಿದೆ, ತರಗತಿಯ ಒಳಗೆ ನಾವು ಬಳಸುವ ಯಾವುದೇ ಆಚರಣೆಯೂ ಅದಕ್ಕೂ ದೊಡ್ಡದಾದ ಸಮಾಜದೊಡನೆಯ ನಮ್ಮ ವ್ಯವಹಾರ ಮತ್ತು ಅದನ್ನು ನಾವು ಅರ್ಥಮಾಡಿಕೊಂಡಿರುವ ರೀತಿ ಇವೆರಡನ್ನೂ ಪ್ರತಿಬಿಂಬಿಸುತ್ತದೆ. ವಿದ್ಯಾರ್ಥಿಗಳನ್ನು ನಾವು ಪ್ರಜಾಪ್ರಭುತ್ವದ ನಿರ್ಣಯ-ತೆಗೆದುಕೊಳ್ಳುವಿಕೆಯಲ್ಲಿ ಭಾಗವಹಿಸುವ ಸಾಮರ್ಥ್ಯವಿರುವ ಸಕ್ರಿಯ ಕಲಿಕೆಗಾರರನ್ನಾಗಿ ನೋಡಲು ಸಾಧ್ಯವಾಗುವುದು ನಾವು ಇಡಬಹುದಾದ ಪ್ರಮುಖ ಹೆಜ್ಜೆಯಾಗಿದೆ. ಶಾಲಾ ವ್ಯವಸ್ಥೆಗಳು *ಬಾಲ್ ಸಂಸದ್*ನಂತಹ ಪ್ರಕ್ರಿಯೆಗಳನ್ನು, ಶಾಲಾ ನಿರ್ವಹಣಾ ಮಂಡಳಿಯ ಭಾಗವಾಗುವ(ಶಾಲೆಯ ಪ್ರತಿನಿಧಿಯಾಗಿ) ಅವಕಾಶಗಳನ್ನು ಸ್ಥಾಪಿಸಿದ್ದರೂ, ಬಹುತೇಕ ಮಕ್ಕಳ ಧ್ವನಿಯನ್ನು ಕೇಳಲಾಗುವುದಿಲ್ಲ ಅಥವಾ ಅದಕ್ಕೆ ಮಾನ್ಯತೆ ನೀಡಲಾಗುವುದಿಲ್ಲ.

ಬೋಧಕರಾಗಿ ಪ್ರಜಾಪ್ರಭುತ್ವದ ಆಚರಣೆಗಳನ್ನು ಸಂವಾದ ಮತ್ತು ಅಂಗೀಕೃತ ಪದ್ಧತಿಗಳ ಮೂಲಕ ಸಬಲೀಕರಿಸಿ, ಮುಂದೆ ಶಾಲಾ ವ್ಯವಸ್ಥೆ ಮತ್ತು ಅದಕ್ಕೂ ದೊಡ್ಡದಾದ ಸಮಾಜದಲ್ಲಿ ಭಾಗವಹಿಸಲು ಅವರಿಗೆ ಅನುವು ಮಾಡಿಕೊಡುವುದು ನಮ್ಮ ಕೈಯಲ್ಲೇ ಇದೆ. ಏನಿದ್ದರೂ, ಪ್ರಜಾಪ್ರಭುತ್ವ ಯಾಂತ್ರಿಕ ಪ್ರಕ್ರಿಯೆಯಲ್ಲ, ಅದೊಂದು ಜೀವಂತ, ನಿರಂತರ ನಡೆಯುವ ಸಾಮಾಜಿಕ ಅಗತ್ಯ.

**ಮಕ್ಕಳ ಅಸ್ಮಿತೆಯನ್ನು ಸಂರಕ್ಷಿಸಲು ಅವರ ಹೆಸರುಗಳನ್ನು ಬದಲಿಸಲಾಗಿದೆ.*

**ಉಲ್ಲೇಖಗಳು**

Doyle, W. (2013). *Ecological Approaches to Classroom Management*. Handbook of Classroom Management (pp. 107-136). Routledge.

Larson, K. E., Pas, E. T., Bradshaw, C. P., Rosenberg, M. S., & Day-Vines, N. L. (2018). *Examining How Proactive Management and Culturally Responsive Teaching Relate to Student Behavior: Implications for Measurement and Practice*. School Psychology Review, 47(2), 153-166.

Nakane, I. (2005). *Negotiating Silence and Speech in the Classroom*. Multilingua - Journal of Cross-Cultural and Interlanguage Communication 24(1part2):75-100.

Taylor, L. A. (2022). *Silence as Political and Pedagogical: Reading Classroom Silence Through Neoliberal and Humanizing Lenses*. Linguistics and Education, 68, 100863

---

**ಅಲಿಸ್ ಬರ್ವಾ** ಅವರು ಛತ್ತೀಸ್‌ಗಢದ ರಾಯ್‌ಘರದ ಅಜೀಮ್ ಪ್ರೇಂಜಿ ಸಂಸ್ಥೆಯ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ನವ ದೆಹಲಿಯ ಡಾ॥ ಬಿ.ಆರ್.ಅಂಬೇಡ್ಕರ್ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಎಮ್‌ಏ ಮುಗಿಸಿದ್ದಾರೆ. ಆಕೆಯ ಸಂಶೋಧನಾ ಆಸಕ್ತಿಗಳು ಶಿಕ್ಷಣ, ಸಂಸ್ಕೃತಿ, ಸಮಾಜಶಾಸ್ತ್ರ ಮತ್ತು ಭಾಷಾಶಾಸ್ತ್ರಗಳನ್ನು ಒಳಗೊಂಡಿವೆ.
alice.barwa@azimpremjifoundation.org